ಡಾ|| ಜ್ಯೋತ್ಸ್ನಾ ಕಾಮತ್

# ಗಂಡಸರಿಗೂ ಸೀರೆ

ಕರ್ನಾಟಕದ ಇತಿಹಾಸ, ಸಾಹಿತ್ಯ, ಶಿಲ್ಪ ಮತ್ತು ಭಿತ್ತಿಚಿತ್ರಗಳನ್ನು ಕೂಲಂಕಷವಾಗಿ ಅವಲೋಕಿಸಿದಾಗ ಪುರುಷರು ತಮ್ಮ ವ್ಯಕ್ತಿತ್ವ, ರೂಪಗಳಲ್ಲಿ ಹೆಚ್ಚಳ ಮಾಡಲು, ಇತರ ಅಲಂಕಾರಗಳೊಂದಿಗೆ ಸ್ತ್ರೀಯರೊಂದಿಗೆ ಸ್ಪರ್ಧಿಸಿ ಸೀರೆಗಳನ್ನು ಉಡುತ್ತಿದ್ದರೆಂಬ ಸತ್ಯದ ಅರಿವಾಗುವುದು.

'ಸೀರೆ' ಶಬ್ದ, 'ಚೀರ' ಸಂಸ್ಕೃತ ಪದದ ತದ್ಭವವಾಗಿದ್ದು, ಉಡಬಹುದಾದ ಉದ್ದಳತೆಯ ಯಾವುದೇ ಬಟ್ಟೆಯನ್ನು ಸೂಚಿಸುತ್ತದೆ. ಬೌದ್ಧಕಾಲದಿಂದ ಇಂದಿನವರೆಗೂ ಒಂದೇ ಬಟ್ಟೆ (ಸೀರೆ) ಉಡುವ ಪದ್ಧತಿ ಜಾರಿಯಲ್ಲಿದೆ. ತಾಳಗುಂದದ ಪ್ರಸಿದ್ಧ ಅಗ್ರಹಾರದಲ್ಲಿ ಹಲವು ವಿದ್ಯಾರ್ಥಿಗಳು ಓದುತ್ತಿದ್ದು ಅವರಿಗೆ ವರ್ಷ ವರ್ಷವೂ ಸೀರೆಗಳನ್ನು ಹಂಚುವ ಏರ್ಪಾಡು ಮಾಡಲಾಗಿತ್ತು.[1] ಸೀರೆಗಳ ಅಂತರ್ ರಾಜ್ಯ ವ್ಯಾಪಾರದ ಮಳಿಗೆಗಳು ಬೆಳಗಾಂವಿಯಲ್ಲಿದ್ದು ಚಿನ್ನದ ಜರಿಯ ಕಲಾಬತ್ತಿನ ಕೆಲಸ ಮಾಡಿದ, ಮಾಡದ ಸೀರೆಗಳ "ದೂಸಿಗವಸರ"ಗಳು ಹನ್ನೆರಡನೆಯ ಶತಮಾನದಲ್ಲಿ ಪ್ರಸಿದ್ಧವಿದ್ದವು.[2] ಕಬ್ಬಿಗ ಆಂಡಯ್ಯನು ತನ್ನೂರಿನ ಅಂಗಡಿಗಳ ಅಂದದ ಸೀರೆಗಳನ್ನು ವರ್ಣಿಸಲು ಮರೆತಿಲ್ಲ.

ಮಿಗೆ ಜೆಲಿಯೇರಿದ ಪೂಲಿಯ ಮಗರಿಯ
ದೋರಿಯುದ ಪರಿಯ ತಲವಟ್ಟೆಯ
ಕಾಡಿಗೆ ನೀರು ಬಟ್ಟೆಯ ಮಳಿಗೆಗಳಿಂ
ಸೋಲಿಪುದು ಸೀರೆ ವರದರ ಪಸರಂ

ಪೂಲಿ, ಮಗರಿ; ತಲವಟ್ಟೆ, ಕಾಡಿಗೆ ನೀರು ಇವೆಲ್ಲ ಊರುಗಳಲ್ಲಿ ಚೆಂದದ ಸೀರೆಗಳನ್ನು ತಯಾರಿಸುತ್ತಿದ್ದರು, ಎಂದು ಅರಿವಾಗುವುದು.

ಬಸವ ಪುರಾಣದಲ್ಲಿ ಭೀಮಕವಿಯು ಬಗೆಬಗೆಯ ಸೀರೆಗಳನ್ನು ಉಲ್ಲೇಖಿಸುತ್ತಾನೆ.

ಕಟ್ಟುವಣ್ಣದ ಪಟ್ಟೆ, ಬಲ್ಲಾಳದಟ್ಟೆ
ಭೂಸಲೆ, ಮೇಘವಣ್ಣದ ಪಟ್ಟೆ
ತವರಾಜಂ, ಮರಕತದ ಬಟ್ಟೆ
ಮಾಂದಳಿರ ಪಟ್ಟೆ, ಸಣ್ಣವಡಂಚೆಯಂ
ಪೊಂಬಟ್ಟೆ, ಸಿರಿಗಣೆ, ಗುಜ್ಜರಾಷ್ಟ್ರದ ಪಟ್ಟೆ
ವಾರಣಾಸಿಯ ದಸರಿ....[3]

ಕಟ್ಟುಬಣ್ಣದ ಅಂದರೆ ಬಣ್ಣ ಹೋಗದ ಸೀರೆಯನ್ನು ಉಲ್ಲೇಖಿಸಿದ್ದರಿಂದ ನೀರಿಗೆ ಹಾಕಿದೊಡನೆ ಬಣ್ಣಗೇಡಿಯಾಗುವ ಸೀರೆಗಳೂ ಪ್ರಚಲಿತವಿದ್ದಿರಲೇಬೇಕು.

---

* ಶಶಿಕಿರಣ ಅಪಾರ್ಟ್‌ಮೆಂಟ್ಸ್, ೧೭ನೆಯ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–೫೬೦ ೦೫೫

1 ಎ. ಕ. VII, ಶಿಕಾರಿ, ೨೮೫, ಕ್ರಿ.ಶ. ೧೧೫೮

2 ಇ. ಐ. XIII, ಪು. ೨೦

3 ಬಸವ ಪುರಾಣ, ಕಾಂಡ ೩, ಸಂಧಿ ೧೦

ಹೊಯ್ಸಳರ ನಾಡಿನಿಂದ ಬಂದದ್ದು ಬಲ್ಲಾಳ ಪಟ್ಟೆ ಯಿರಬೇಕು. ಮಹಾರಾಷ್ಟ್ರದಿಂದ ಬಂದುದು ಭೋಸಲೆ (ಭೂಸಲೆ) ಬಟ್ಟೆ. ಸ್ಥಾನೀಯ ಸಿರಿಗಣೆಯದು ರೇಷ್ಮೆ ಯಾದರೆ, ಗುಜರಾಥ ಮತ್ತು ಕಳಿಂಗದವೂ ಇಲ್ಲಿ ಜನಪ್ರಿಯವಾಗಿದ್ದವು. ವಾರಣಾಸಿಯ ದಸರಿ ಅಥವಾ ಬನಾರಸ್ ಸಿಲ್ಕು ಅಂದಿನಿಂದ ಇಂದಿನವರೆಗೂ ಜನರ ಆದರ ಉಳಿಸಿಕೊಂಡಿದೆ. ಮಾನಸೋಲ್ಲಾಸ ಬರೆದ ಚಾಲುಕ್ಯ ದೊರೆ ಸೋಮೇಶ್ವರನು ತನ್ನ ಕಾಲದಲ್ಲಿ (೧೧೨೬-೧೧೩೮ ಕ್ರಿ.ಶ ) ಕರ್ನಾಟಕಕ್ಕೆ ಯಾವ ಯಾವ ಪ್ರದೇಶಗಳಿಂದ ಸೀರೆಗಳು ಬರುತ್ತಿದ್ದವು ಎಂಬುದನ್ನು ಉಲ್ಲೇಖಿಸಿದ್ದಾನೆ. ಅವುಗಳಲ್ಲಿ ಪೊದ್ದಲಪುರ, ಚೀರ ಪಲ್ಲಿ, ನಾಗಪಟ್ಟಣ, ತೊಂಡೆಮಂಡಲ, ಚೋಳ ದೇಶ, ವಂಗ, ಕಳಿಂಗ, ಸಿಂಹಳ, ಅನಹಿಲವಾಡ (ಗುಜರಾಥ), ಮೂಲಸ್ಥಾನ ಅಥವಾ ಮುಲ್ತಾನದವು ಪ್ರಮುಖ ವಾದವುಗಳು.[4] ಶುಭ್ರ ಬಣ್ಣ, ಬೀದಿ ಬಿಳಿ (ಆಫ್ ವ್ಯಾಟ್ ?) ಗಳು ಹೆಚ್ಚು ಬೇಡಿಕೆಯ ಬಣ್ಣಗಳಾದರೂ ಮುಗಿಲು ಬಣ್ಣ, ಗಿಳಿ ಹಸಿರು, ಮಾವಿನ ತಳಿರು, ತಿಳಿ ಹಳದಿ, ಸುವರ್ಣ ವರ್ಣದ ಬಟ್ಟೆಗಳೂ ಗಂಡಸರಲ್ಲಿ ಪ್ರಿಯವಾಗಿದ್ದವು.

ಪ್ರಾಚೀನ ಕನ್ನಡ ಸಾಹಿತ್ಯ ಓದಿದವರಿಗೆ ಸೀರೆಗಳ ಸ್ವಾರಸ್ಯಕರ ವರ್ಣನೆಗಳು ಸಾಕಷ್ಟು ಪರಿಚಿತ. ಸಿದ್ಧ ರಾಮ ಚರಿತದಲ್ಲಿ ರಾಘವಾಂಕನು 'ಹೊಸ ದೇಸಿಕಾ ರತನ'ದಲ್ಲಿ ಶೋಭಿಸುವ ಹಸಿರು ಮಡಿಯ, ಬೆಳ್ಳಿಯ ಅಂಚಿನ, ಚಿನ್ನದ ನಕ್ಷೆಯ, ಚೀನಾಂಬರದ ಸಂಧ್ಯಾರಾಗದ ಹಂಸಶುಭ್ರವಾದ ಧೂಳಿಯ ಬಣ್ಣದ ಸೀರೆಗಳ ಬಗ್ಗೆ ಹೇಳಿದ್ದಾನೆ.[5] ಹರಿಹರನು ಸೀರೆಗಳ ಮೇಲಿರುವ ಲತಾವಳಿ, ಪುಷ್ಪಾವಳಿ, ಹಂಸಾವಳಿ, ಸಿಂಹಾವಳಿಗಳನ್ನು ಗಮನಿಸಿ ತನ್ನ ಪ್ರಾಣಿ ಪ್ರೇಮ, ನಿಸರ್ಗ ಪ್ರೇಮವನ್ನು ಸೂರೆ ಮಾಡಿದ್ದಾನೆ.[6] ಇದರಂತೆ ಚೌಕಡಿ, ವರ್ತುಳ, ಬಿಂದು, ಗೀರು, ರೇಖೆಗಳ ಬಗೆಬಗೆಯ ಆಕೃತಿಗಳಿಂದ ಸೀರೆಗಳನ್ನು ಅಲಂಕರಿಸುತ್ತಿದ್ದರು. ಆರ್ಥಿಕ ಸ್ಥಿತಿ-ಗತಿ, ಮತ್ತು ಕೈಕೊಂಡ ವೃತ್ತಿಗಳಿಗೆ ಅನುಗುಣವಾಗಿ ಸೀರೆ ಗಳನ್ನು ಉಡುತ್ತಿದ್ದರು. ಜನಸಾಮಾನ್ಯರು, ಪಟ್ಟೆ, ಧೋತರ, ಪಂಚೆ, ಕಿರಿಪಂಚೆಗಳನ್ನು, ಅಂಗವಸ್ತ್ರಗಳನ್ನು ಕೊಳ್ಳುತ್ತಿದ್ದರು. ಸಿರಿವಂತರು, ರಾಜ-ಮಹಾರಾಜರು ನವಿರಾದ, ಕಲಾಪತ್ತಿನ ಕಸೂತಿಯಿದ್ದ ರೇಶ್ಮೆ ಸೀರೆ ಗಳನ್ನೇ ಕೊಳ್ಳುತ್ತಿದ್ದರು. ಅಲ್ಲದೇ ಋತುಮಾನಗಳಿಗೆ ಅನುಸಾರವಾಗಿ ಸೀರೆಗಳನ್ನು ಬದಲಾಯಿಸುತ್ತಿದ್ದರು. ವಸಂತ ಋತುವಿನಲ್ಲಿ ತಿಳುವಾದವುಗಳು, ಬೇಸಿಗೆಯಲ್ಲಿ ಶ್ವೇತವರ್ಣದವು, ಮಳೆಗಾಲದಲ್ಲಿ ರಬ್ಬಾದವುಗಳು ಶರದ್ ಋತುವಿನಲ್ಲಿ ಹೊಂಬಣ್ಣದವನ್ನು ಉಡುತ್ತಿದ್ದರು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಯಂತ್ರ ಗಳಿಂದ ಬಣ್ಣ ಹಾಕುವುದು, ಅಚ್ಚು ಹೊಡೆಯುವ ಉದ್ದಿಮೆಗಳು ಪ್ರಚಲಿತವಿದ್ದವು. ನೀರಿಗೆ ಹಾಕಿ ದಂತೆ ಹೆಚ್ಚೆಚ್ಚು ಕಾಂತಿಮಯವಾಗುವ ಬಟ್ಟೆಗಳ ಬಗ್ಗೆಯೂ ಹೇಳಲಾಗಿದೆ.[7]

ಕರ್ನಾಟಕದ ಗಂಡಸರು ಸೀರೆಗಳನ್ನು ಉಟ್ಟು ರಸಿಕತೆಯಿಂದ ಮೆರೆಯುವುದನ್ನು ನೋಡಿ ಕಾಶ್ಮೀರದ ದೊರೆ ಹರ್ಷನು ತನ್ನ ರಾಜ್ಯದಲ್ಲಿಯೂ ಇಂಥ ಬಟ್ಟೆ-ಬರೆಗಳನ್ನು ರೂಢಿಯಲ್ಲಿ ತಂದನೆಂದು ಕಲ್ಹಣನ ರಾಜ ತರಂಗಿಣಿ ಹೇಳುತ್ತದೆ.[8]

ಶಿಲ್ಪಗಳಲ್ಲಿ, ವೀರಗಲ್ಲುಗಳಲ್ಲಿ, ಅಲ್ಲೊಂದು ಇಲ್ಲೊಂದು ಸೀರೆಯುಟ್ಟ ಪುರುಷರನ್ನು ಗುರುತಿಸ ಬಹುದು. ಶ್ರವಣಬೆಳ್ಗೊಳದ ಜೈನಮಠದಲ್ಲಿರುವ ಭಿತ್ತಿ ಚಿತ್ರಗಳಲ್ಲಿ, ಊರ ಜಾತ್ರೆಯಲ್ಲಿ ಸೀರೆಯ ಮಳಿಗೆ ಗಳನ್ನು ಬಿಂಬಿಸಲಾಗಿದೆ. ಅಂಗಡಿಯವನು ತೋರಿಸಿದ ಸೀರೆಯನ್ನು ಪುರುಷನೋರ್ವನು ಮೊಳ ಹಾಕಿ ಅಳೆಯು ತ್ತಿದ್ದಾನೆ. ಬಟ್ಟೆಯ ಉದ್ದಗಲಳತೆ ಕುಳಿತು ಅಂದಿನ ಅಂಗಡಿಯವರೂ ಗಿರಾಕಿಗಳಿಗೆ ಮೋಸ ಮಾಡುತ್ತಿರ

4 ಮಾನಸೋಲ್ಲಾಸ ಭಾಗ ೩, ಪದ್ಯಗಳು ೧೦೮೭-೯೦
5 ಸಿದ್ಧರಾಮ ಚಾರಿತ್ರ ೮, ಪದ್ಯ ೫೬
6 ಗಿರಿಜಾ ಕಲ್ಯಾಣ ಮಹಾಪ್ರಬಂಧ ಆ ೧, ಪದ್ಯ ೭೧
7 ಮಾನಸೋಲ್ಲಾಸ ೩ : ೬, ಪದ್ಯ ೧೦೩೭
8 ಕಲ್ಹಣ : ರಾಜತರಂಗಿಣಿ ೪, ಪದ್ಯ ೯೩೫-೪೦

ಬೇಕು ! ಲೇಪಾಕ್ಷಿಯಲ್ಲಿರುವ, ವಿಜಯನಗರದ ದೊರೆಯಾದ ಅಚ್ಯುತದೇವರಾಯನ ಕಾಲದಲ್ಲಿ (ಕ್ರಿ. ಶ. ೧೫೩೮) ಕಟ್ಟಿಸಿದ ಪಾಪನಾಥೇಶ್ವರ ದೇವಾಲಯದ ಭಿತ್ತಿ ಚಿತ್ರಗಳಲ್ಲಿ ಅಂದು ಪ್ರಚಲಿತವಿದ್ದ ಪುರುಷರ ಬಗೆ ಬಗೆಯ ಸೀರೆಗಳನ್ನು ನೋಡಬಹುದಾಗಿದೆ. ಮಹಾ ಮಂಟಪದ ಸೂರಿನ ಒಳಗೋಡೆಯ ಮೇಲೆ ಶಿವಪುರಾಣವನ್ನಾಧರಿಸಿದ ಅನೇಕಾನೇಕ ಚಿತ್ರಗಳನ್ನು ರಚಿಸಲಾಗಿದೆ. ಪಾರ್ವತಿ ಪರಿಣಯ, ಕಿರಾತಾರ್ಜುನೀಯ, ದಕ್ಷಿಣಾಮೂರ್ತಿ, ಶ್ರೀರಾಮಪಟ್ಟಾಭಿಷೇಕ, ಶೇಷಶಾಯಿ, ವಟಪತ್ರಶಾಯಿ ಕೃಷ್ಣನ ಚಿತ್ರ ಬಿಡಿಸಿ ಆ ಕಾಲದ ಪ್ರಚಲಿತ ವೇಷ ಭೂಷಣಗಳನ್ನು ಕಾಣಿಸಲಾಗಿದೆ. ಪೆನುಕೊಂಡೆಯ ನಂದಿಲಕ್ಕಿಶೆಟ್ಟಿಯ ಮಗ ವಿರೂಪಣ್ಣನು ಮಾಡಿದ ದಾನದಿಂದ ಈ ದೇವಾಲಯವನ್ನು ಕಟ್ಟಿಸಲಾಗಿದೆ, ಎಂದು ಅಲ್ಲಿರುವ ಶಾಸನವೊಂದು ಸಾರಿ ಹೇಳುತ್ತದೆ. ಅಂತೆಯೇ ವಿರೂಪಣ್ಣ ಮತ್ತು ಅವನ ಸೋದರ ವೀರಣ್ಣನ ಭಾವ ಚಿತ್ರಗಳಿಗೆ ಆದ್ಯತೆ ಕೊಡಲಾಗಿವೆ. ಇವನ ಸೋದರರು ಕೇಸರಿ ವರ್ಣದ ನಿಲುವಂಗಿ ತೊಟ್ಟು ಅದರ ಮೇಲೆ ಓರಣವಾಗಿ 'ಸೀರೆ'ಯನ್ನು ಸುತ್ತಿಕೊಂಡಿದ್ದಾರೆ. ವಿರೂಪಣ್ಣನ ರಬ್ಬಾದ ಚೌಕಡಿ ಸೀರೆಗೆ ನಾಶೀಪುಡಿ ಬಣ್ಣದ ಅಂಚು ಇದ್ದರೆ, ವೀರಣ್ಣನ ಕೆಂಪು ಚುಕ್ಕಿಯ ಸೀರೆಗೆ ಕಪ್ಪು ಹೂಬಳ್ಳಿಯ ಅಂಚನ್ನು ಹೊಂದಿಸಲಾಗಿದೆ. ಇವರ ಮೇಲ್ಪಂಕ್ತಿಯನ್ನು ಅನುಸರಿಸಿ, ಇನ್ನಿತರ ಊರ ಪ್ರತಿಷ್ಠಿತರೂ ನಿಲುವಂಗಿಗಳ ಮೇಲೆ ಕಿರಿ ಸೀರೆಗಳನ್ನು ಪ್ರದರ್ಶಿಸಿದ್ದಾರೆ. ದೇವ, ದೇವತೆಗಳೂ ಇಂಥ ಸೀರೆಗಳಲ್ಲಿಯೇ ಚಿತ್ರಿತರಾಗಿದ್ದಾರೆ.

ಜನಸಾಮಾನ್ಯರು ನಿಲುವಂಗಿಯಿಲ್ಲದೇ ಸೀರೆಯನ್ನು ಪಂಚೆಯಂತೆ ಉಟ್ಟಿದ್ದಾರೆ. ಕೆಲವರು ಹಿಂಗಚ್ಚೆ ಹಾಕಿ ಉಟ್ಟರೆ, ಉಳಿದವರು ಮುಂಡುಪಂಚೆಯಂತೆ ಉಟ್ಟಿದ್ದಾರೆ. ವೈಗಂಟುವಂತೆ ಉಟ್ಟವರು ಇದ್ದರೆ, ಸಡಿಲಾಗಿ ಸುತ್ತಿಕೊಂಡವರೂ ಇದ್ದಾರೆ. ಈ ಸೀರೆಗಳೆಲ್ಲ ಏಕವರ್ಣೀಯವಾಗಿರದೇ ವಿವಿಧ ಬಣ್ಣ-ನಕ್ಷೆಗಳಿಂದ ಕೂಡಿದ್ದಾಗಿವೆ. ಕೆಲವೊಂದು ಚಿತ್ರಗಳಲ್ಲಿ ಬೇರೊಂದು ಅಂಗವಸ್ತ್ರವನ್ನು ಸುತ್ತಿಕೊಂಡಂತೆ ಭಾಸವಾಗುತ್ತದೆ. ಕೆಲವರು ಕಸೂರಿನ ಕೆಲಸವಿದ್ದ ಶಾಲನ್ನು ಎಡಭುಜದ ಮೇಲಿಂದ ಇಳಿಬಿಟ್ಟಿದ್ದಾರೆ. ಅದೇ ಕಾಲದಲ್ಲಿ ರಚಿತವಾದ ಹಂಪೆಯ ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳಲ್ಲಿಯೂ ಇಂತಹವೇ ಪುರುಷರ ಸೀರೆಗಳನ್ನು ಗುರುತಿಸಬಹುದು.